


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 933 (1140)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಡಾ. ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಪಂಚಾಯತ್ ಅಭಿವೃದ್ಧಿ ಅಧಿಕಾರಿ ಮತ್ತು ಸಹಾಯಕ ನಿರ್ದೇಶಕರ ಸೇವೆಯ ಕುರಿತು

(ಅ) ಪಿ.ಡಿ.ಓ., ಗಳ ಜೇಷ್ಠತಾ ಪಟ್ಟಿಯನ್ನು ತಯಾರು ಮಾಡದಿರಲು ಕಾರಣವೇನು ; ಸದರಿ ಪಟ್ಟಿಯನ್ನು ಯಾವ ಅಧಿಕಾರಿ ತಯಾರು ಮಾಡಬೇಕಿತ್ತು, ಅವರ ಹೆಸರು ಮತ್ತು ಪದನಾಮ ತಿಳಿಸುವುದು;

(ಆ) ಹಿಂದಿನ ಪಂಚಾಯತ್ ವಿಸ್ತರಣಾಧಿಕಾರಿಗಳಿಗೆ P.D.O..,ವೃಂದದಲ್ಲಿ ವಿಲೀನಗೊಳಿಸಿದ ದಿನಾಂಕ ಮತ್ತು ಆದೇಶದ ಪ್ರತಿ ಹಾಗೂ P.D.O..,ವೃಂದದಲ್ಲಿ ವಿಲೀನಗೊಳಿಸಿದ ಪಂಚಾಯತ್ ವಿಸ್ತರಣಾಧಿಕಾರಿಗಳ ಪಟ್ಟಿಯನ್ನು ಅವರ ಹೆಸರು, ಸೇವೆಗೆ ಸೇರಿದ ದಿನಾಂಕ ಸಹಿತ ನೀಡುವುದು ;

(ಇ) ಮಂಜೂರಾದ P.D.O. ಹುದ್ದೆಗಳು ಎಷ್ಟು ; ಅವುಗಳಲ್ಲಿ ಬಡ್ತಿ ಕೋಟಾ ಹುದ್ದೆಗಳು ಎಷ್ಟು ; ಪಂಚಾಯತ್ ವಿಸ್ತರಣಾಧಿಕಾರಿಗಳಿಗೆ ಯಾವ ಕೋಟಾದಡಿಯಲ್ಲಿ P.D.O. ಹುದ್ದೆಯಲ್ಲಿ ವಿಲೀನಗೊಳಿಸಲಾಗಿದೆ ಮತ್ತು ಪಂಚಾಯತ್ ವಿಸ್ತರಣಾಧಿಕಾರಿಗಳನ್ನು P.D.O. ವೃಂದದಲ್ಲಿ ಸೇರಿಸುವ ಸರ್ಕಾರಿ ಆದೇಶದ ಪ್ರತಿ ನೀಡುವುದು ;

(ಈ) ಒಟ್ಟು ಮಂಜೂರಾದ ಸಹಾಯಕ ನಿರ್ದೇಶಕರ ಹುದ್ದೆಗಳ ಸಂಖ್ಯೆ ಎಷ್ಟು ; ಇದರಲ್ಲಿ ಖಾಲಿ ಇರುವ ಹುದ್ದೆಗಳು ಎಷ್ಟು ; ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸಹಾಯಕ ನಿರ್ದೇಶಕರ ಪಟ್ಟಿಯನ್ನು ಜೇಷ್ಠತಾ ಕ್ರಮದಲ್ಲಿ ಅವರು ಪಡೆದ ಅಂಕಗಳ ಸಹಿತ ನೀಡುವುದು;

(ಉ) ಹೆಚ್ಚುವರಿ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಸೃಜನೆ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ ; ಇದ್ದರೆ ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ ಮತ್ತು ಎಷ್ಟು ಹುದ್ದೆಗಳನ್ನು ಸೃಜನೆ ಮಾಡಲಾಗಿದೆ ; (ಆದೇಶದ ಪ್ರತಿ ನೀಡುವುದು)

(ಊ) ಕಳೆದ 10 ವರ್ಷಗಳಲ್ಲಿ ಬೇರೆ ಇಲಾಖೆಯಿಂದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಎಷ್ಟು ಅಧಿಕಾರಿಗಳನ್ನು ಶಾಶ್ವತವಾಗಿ ವಿಲೀನಗೊಳಿಸಲಾಗಿದೆ ? (ಅಧಿಕಾರಿಯ ಹೆಸರು, ಹುದ್ದೆ ಮತ್ತು ಮೂಲ ಇಲಾಖೆ ಹಾಗೂ ವೇತನ ಶ್ರೇಣಿ ಸಹಿತ ವಿವರ ನೀಡುವುದು)